


# ಜ್ಯೋತಿಷ ಮಿತ್ರ

ಆನ್‌ಲೈನ್ ದಿನಪತ್ರಿಕೆ

www.jyothishamithra.com

**ಸಂಚಿಕೆ : 1337   02-05-2022  ಸೋಮವಾರ**

ಶುಭಕೃತ್ ಸಂವತ್ಸರ  ಉತ್ತರಾಯಣ ವಸಂತಋತು ವೈಶಾಖಮಾಸ  ಶುಕ್ಲಪಕ್ಷ

| ನಿತ್ಯ ಪಂಚಾಂಗ | ಸುಜ್ಞಾನ |
|---|---|
| ತಿಥಿ : ಬಿದಿಗೆ (29:18)<br>ನಕ್ಷತ್ರ : ಕೃತ್ತಿಕಾ (24:32)<br>ರಾಹುಕಾಲ :<br>07:44 AM - 09:18 AM<br>ಗುಳಿಕಕಾಲ :<br>02:01 PM - 03:36 PM | ಒಳ್ಳೆತನಕ್ಕೆ ಬೆಲೆ ಇಲ್ಲ ಅನ್ನೋದು ಎಷ್ಟು ಸತ್ಯವೋ, ಹಾಗೇ ಆ ಒಳ್ಳೆತನ ನಮ್ಮನ್ನ ಕೈ ಬಿಡಲ್ಲ ಅನ್ನೋದು ಅಷ್ಟೇ ಸತ್ಯ. |






## ಶಕ್ತಿಯುತವಾದ ದಿಕ್ಕು

# ಈಶಾನ್ಯ

ಈಶಾನ್ಯ ಶ್ರೇಷ್ಠ ಹಾಗೂ ಶಕ್ತಿಯುತವಾದ ದಿಕ್ಕು. ಸೂರ್ಯನ ಪ್ರಥಮ ಕಿರಣ ಬೀಳುವ ಸ್ಥಳ. ಇದರ ಅಧಿಪತಿ ರುದ್ರ. ಗ್ರಹಾಧಿಪತಿ ಬೃಹಸ್ಪತಿ, ಜಲತತ್ವ, ಹಳದಿ ವರ್ಣ.

**ದಿಕ್ಕಿನ ಮಹತ್ವ:** ದೇವತೆಗಳ ಅನುಗ್ರಹ, ಪವಿತ್ರತೆ, ಪುಣ್ಯ, ಶುಭ ಚಿಂತನೆಗಳ ಸ್ಥಳ, ಮೂಲ ಪ್ರಭಾವಿ ಸ್ಥಳ, ಗಂಡು ಸಂತಾನದ ಏಳಿಗೆ, ವಂಶ ರಕ್ಷ ಣೆಯ ಸ್ಥಳ.

**ದಿಕ್ಕಿನಲ್ಲಿ ಇರಬೇಕಾದ ಅಂಶಗಳು:** ದೊಡ್ಡ ಕಿಟಕಿ, ಬಾವಿ, ಬಾಗಿಲು,ನೀರಿನ ತೊಟ್ಟಿ, ಕೊಳವೆ ಬಾವಿ, ನೈರುತ್ಯಕ್ಕಿಂತ ಹೆಚ್ಚಿನ ಜಾಗವಿರಬೇಕು ಎಲ್ಲಾ ದಿಕ್ಕುಗಳಿಗಿಂತ ತಗ್ಗಾದ ಸ್ಥಳದಲ್ಲಿರಬೇಕು.

ಮೇಲಿನ ಎಲ್ಲಾ ಅಂಶಗಳು ಸರಿಯಾದ ರೀತಿಯಲ್ಲಿ ಇದ್ದರೆ ಈ ದಿಕ್ಕಿನಿಂದ ಗೃಹಸ್ಥರು ಸಕಲ ಐಶ್ವರ್ಯ ಸಂಪತ್ತುಗಳಿಂದ ಕೂಡಿದ್ದು ಎಲ್ಲಾ ರೀತಿಯಲ್ಲಿ ಜೀವನದಲ್ಲಿ ಏಳಿಗೆಯನ್ನು ಹೊಂದುತ್ತಾರೆ.

**ಶುಭ ಫಲ:** ಜ್ಞಾನ, ವಿದ್ಯಾಭ್ಯಾಸ, ದೈವಿಕ ಚಿಂತನೆ, ಕೀರ್ತಿ, ಸಾಧನೆ, ರಕ್ಷಣೆ, ಆಧ್ಯಾತ್ಮಿಕತೆ, ಐಶ್ವರ್ಯ, ಧನಾರ್ಜನೆ, ಆರೋಗ್ಯ, ಚಾರಿತ್ರ್ಯದ ಅಂಶ, ಉಜ್ವಲ ಭವಿಷ್ಯ.

**ಇರಬಾರದ ಅಂಶಗಳು:** ಎಲೆಕ್ಟ್ರಿಕ್ ಮೀಟರ್ ಬೋರ್ಡ್, ಶೌಚಾಲಯ, ಸ್ನಾನದ ಗೃಹ, ಅಡುಗೆ ಮನೆ, ಮುಚ್ಚಿದ್ದರೆ ಹೆಚ್ಚಿನ ಜಾಗ ಇಲ್ಲದೇ ಇದ್ದರೆ, ಹೆಚ್ಚಿನ ಬಾರ ಇರಬಾರದು, ಮೆಟ್ಟಿಲು, ಲಿಫ್ಟ್, ಸ್ಟೋರ್ ರೂಂ, ಕಸ, ಕಲ್ಲಿನ ರಾಶಿ, ಕೆಟ್ಟ ನೀರಿನ ಸಂಗ್ರಹ, ಅಥವಾ ಕೆಟ್ಟ ನೀರು ಹಾದು ಹೋಗಬಾರದು,.

**ಈಶಾನ್ಯ ವಾಸ್ತು ಪ್ರಕಾರ ಇಲ್ಲದಾಗ ಉಂಟಾಗುವ ಅಶುಭ ಫಲ:** ಗಂಡು ಸಂತಾನಕ್ಕೆ ಉಳಿಗಾಲವಿಲ್ಲ, ಅಪಾರ ಸಂಪತ್ತು ಇದ್ದರೂ ಅನುಭವಿಸಲಾಗದೇ ಗೃಹ ಅನಾಥವಾಗುತ್ತದೆ, ದಾರಿದ್ರ್ಯತೆ, ವಿಕಲಾಂಗ, ಮತಿಭ್ರಷ್ಟತೆ, ಅಲ್ಪಾಯು ಸಂತಾನ ಉಂಟಾಗುತ್ತದೆ. ಬದುಕು ಭಾರ, ಶತೃಗಳ ವೃಧ್ಧಿ, ಗೃಹವಾಸಿಗಳ ಚಾರಿತ್ರ್ಯ ಹೀನ. ಧನ ನಾಶ, ತಪ್ಪದ ಗೃಹ ಕಲಹ, ದತ್ತು ಸಂತತಿಗೂ ತೊಂದರೆ, ದೈವದ ಅನುಗ್ರಹವಿಲ್ಲ, ತಪ್ಪುವ ಗುರು

ಹಿರಿಯರ ಆಶೀರ್ವಾದ, ನಿರಂತರ ವ್ಯಾಧಿ, ದುಃಖ, ಮಾನಸಿಕ ಕ್ಲೇಶ, ದಿವಾಳಿತನ ಸಂಭವ, ದೊಡ್ಡವರು ಚಿಕ್ಕವರ ಅಂತ್ಯಕಾರ್ಯಗಳನ್ನು ಮಾಡಬೇಕಾಗುತ್ತದೆ.



## ಈಶಾನ್ಯ ದಿಕ್ಕಿನ ದೋಷಕ್ಕೆ ಪರಿಹಾರ:

ಸ್ಥಳವನ್ನು ಸ್ವಚ್ಛವಾಗಿಡುವುದು, ಯಾವುದೇ ರೀತಿಯ ಭಾರಗಳನ್ನು ಇಡಬಾರದು, ದೋಷವಾಗಿರುವ ಸ್ಥಳವನ್ನು

ವಾಸ್ತುಶಾಸ್ತ್ರದ ರೀತಿಯಲ್ಲಿ ಸರಿಪಡಿಸಿಕೊಳ್ಳಬೇಕು, ವಾಸ್ತುವಿಗೆ ಸಂಬಂಧಪಟ್ಟ ಸಣ್ಣ ಸಣ್ಣ ಹೂವಿನ ಗಿಡಗಳನ್ನು ಬೆಳೆಸಬಹುದು (ಹೂವಿನ ಗಿಡದಲ್ಲಿ ಮುಳ್ಳು ಇರಬಾರದು), ಈಶಾನ್ಯ ದಿಕ್ಕು ಭಂಗವಾಗಿದ್ದರೆ ಅದನ್ನು ಸರಿಪಡಿಸಬೇಕು. “ವಾಸ್ತು ಪಿರಮಿಡ್ ಯಂತ್ರ”ವನ್ನು ಅಳವಡಿಸಿ ದಿಕ್ಕಿನ ಶಕ್ತಿಯನ್ನು ಹೆಚ್ಚಿಸ ಬಹುದು. ಹಳದಿ ಬಣ್ಣದ ಉಪಯೋಗಿ ಸುವುದರಿಂದ (ಗೋಡೆಗಳಿಗೆ) ಬಲ ಹೆಚ್ಚಿಸಿಕೊಳ್ಳಬಹುದು. ನೀರಿನ ಅಂಶಗಳು ಇರುವಂತೆ ನೋಡಿಕೊಳ್ಳಬೇಕು (ಸಂಪು, ಬಾವಿ ಇತ್ಯಾದಿ), ಗುರು ಹಿರಿಯರನ್ನು ಗೌರವದಿಂದ ಕಾಣಬೇಕು. ಶಿವನಿಗೆ ,ಬೃಹಸ್ಪತಿಗೆ ಸಂಬಂಧಪಟ್ಟ ಪೂಜಾರಾಧನೆಗಳನ್ನು ಮಾಡುವುದು ಒಳ್ಳೆಯದು.




# ಚಂದ್ರ ಭಾವಸ್ಥಿತ ಫಲಾಫಲ

- ಚಂದ್ರನು ಲಗ್ನದಲ್ಲಿ ಅಂದರೆ ಒಂದನೇ ಮನೆಯಲ್ಲಿದ್ದರೆ ಆತನು ತನ್ನ ರೂಪದ ಬಗ್ಗೆ ಮತ್ತು ವ್ಯಕ್ತಿತ್ವದ ಬಗ್ಗೆ ವಿಶೇಷವಾದ ಗಮನಹರಿಸುವನು. ನಿದ್ದೆಯಲ್ಲಿ ನಡೆಯುವುದು, ಮಾತನಾಡುವುದು, ಹೆಚ್ಚಾಗಿ ಕಂಡುಬರುವುದು. ಮಾರ್ಕೆಟಿಂಗ್, ಸೇಲ್ಸ್ ಉದ್ಯೋಗ ಇವರಿಗೆ ಸೂಕ್ತ.

- ಲಗ್ನದಿಂದ ಎರಡನೆ ಮನೆಯಲ್ಲಿದ್ದರೆ ದೊಡ್ಡ ಕುಟುಂಬ ಹಾಗೂ ಮಾತು ಮೃದುವಾಗಿರುತ್ತದೆ.
- 3ನೇ ಮನೆಯಲ್ಲಿದ್ದರೆ ಅಕ್ಕ ಮತ್ತು ತಂಗಿಯರನ್ನು ಪಡೆದಿರುತ್ತಾನೆ.
- 4ನೇ ಮನೆಯಲ್ಲಿದ್ದರೆ ಸುಖ ಜೀವನ.
- 5ನೇ ಮನೆಯಲ್ಲಿದ್ದರೆ ಹೆಣ್ಣು ಸಂತಾನ ಹೆಚ್ಚು.
- 6ನೇ ಮನೆಯಲ್ಲಿದ್ದರೆ ಶೀತ ಬಾಧೆ ಹೆಚ್ಚು.
- 7ನೇ ಮನೆಯಲ್ಲಿದ್ದರೆ ಸಂಸಾರದಲ್ಲಿ ನೆಮ್ಮದಿ,
- 8ನೇ ಮನೆಯಲ್ಲಿದ್ದರೆ ನೀರಿನಿಂದ ಅಪಾಯ,
- 9ನೇ ಮನೆಯಲ್ಲಿದ್ದರೆ ಧಾರ್ಮಿಕ ಕಾರ್ಯಕ್ರಮ ಹೆಚ್ಚು ಮಾಡುವರು.
- 10ನೇ ಮನೆಯಲ್ಲಿದ್ದರೆ ಸಂಚಾರ ಅಥವಾ ನೀರಿಗೆ ಸಂಬಂಧಪಟ್ಟ ಉದ್ಯೋಗದಲ್ಲಿ ಇರುವರು.
- 11ನೇ ಮನೆಯಲ್ಲಿದ್ದರೆ ದ್ರವ ಪದಾರ್ಥ (ಹಾಲು, ನೀರು) ದಿಂದ ಲಾಭ ಬರುವುದು.

- 12ನೇ ಮನೆಯಲ್ಲಿದ್ದರೆ ಬಲಗಣ್ಣಿನ ತೊಂದರೆ ಬರಬಹುದು.

ಚಂದ್ರನ ಜೊತೆಯಲ್ಲಿ ರಾಹು ಇದ್ದರೆಸಿಟ್ಟು ಹೆಚ್ಚು ಇರುವುದು. ಚಂದ್ರನ ಜೊತೆ ಕೇತು ಅಥವಾ ಶನಿ ಇದ್ದರೆ ಖಿನ್ನತೆ, ನಿರಾಶಾವಾದ ಇರುತ್ತದೆ.



ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ

ಗೌರವ ಸಂಪಾದಕರು : ಜೀವನ್ ಉಳ್ಳಾಲ್

ಸಂಪಾದಕರು : ಶ್ರೀಷ ಎಸ್.

ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.

PH : 9986671473 / 9535283535

jmonline@gmail.com www.jyothishamithra.com